CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೩, ೨೦೦೪ (ಜೇಷ್ಠ ೧೩, ಶಕ ವರ್ಷ ೧೯೨೬) | ಸಂಚಿಕೆ ೨೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಯೋಜನೆ/ಕಾಮಗಾರಿಗಳನ್ನು ಜಲಸಂಪನ್ಮೂಲ ಇಲಾಖೆಯಲ್ಲಿ ಬರುವ ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸುವ/ವರ್ಗಾಯಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ:25/2/04ರ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ರವರ ಪತ್ರ ವ್ಯವಹಾರಕ್ಕೆ ಅಂತ್ಯಗೊಂಡ ಅ.ಸ.ಪತ್ರ ಸಂಖ್ಯೆ:ಸಿಎನ್ಎನ್/ಎಎಂಡಿ/ಟಿಇಬಿ/ ಎಂಐ/2004/1047.
2. ದಿನಾಂಕ:16/2/04ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಇಂ/ಸನೀ(ದ)/ತಾಂಸ–2/ಮಂಡ್ಯ/ಮದ್ದೂರು/ಕಾನೀನಿ/ ಹಸ್ತಾಂತರ/2003–04/427.
3. ದಿನಾಂಕ:27/2/04ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಇಂ/ಸನೀ(ದ)/ಕೊಡಗು/ಸನೀ/ಕಾಮಗಾರಿಗಳು/ಅನುದಾನ/2003–04 526.

**ಪ್ರಸ್ತಾವನೆ:**

ಜಲಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಕಾವೇರಿ ಜಲಾನಯನ ಪ್ರದೇಶದಲ್ಲಿ ಬರುವ ಯೋಜನೆಗಳನ್ನು ಕೈಗೊಳ್ಳಲು ಕಾವೇರಿ ನೀರಾವರಿ ನಿಗಮ ನಿಯಮಿತವನ್ನು ಸೃಜಿಸಲಾಗಿದೆ. ಪ್ರಸ್ತುತ ಕಾವೇರಿ ಜಲಾನಯನ ಪ್ರದೇಶದಲ್ಲಿ ಬರುವ ಸಣ್ಣ ನೀರಾವರಿ ಕಾಮಗಾರಿಗಳನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ಅನುದಾನದ ಕೊರತೆಯಿಂದ ಕೈಗೊಳ್ಳಲು ಸಾಧ್ಯವಾಗುತ್ತಿಲ್ಲ. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ರವರು ಸಣ್ಣ ನೀರಾವರಿ ವ್ಯಾಪ್ತಿಯ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ 4 ಕಾಮಗಾರಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ 3 ಕಾಮಗಾರಿಗಳನ್ನು ಹಾಗೂ ಕೊಡಗು ಜಿಲ್ಲೆಯಲ್ಲಿನ 23 ಕಾಮಗಾರಿಗಳನ್ನು ನಿಗಮದ ವತಿಯಿಂದ ಕಾರ್ಯಗತಗೊಳಿಸಲು ಹಸ್ತಾಂತರಿಸುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ರವರು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಕೆಲವು ಕಾಮಗಾರಿಗಳನ್ನು ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬರುವ ಕೆಲವು ಕಾಮಗಾರಿಗಳನ್ನು ಅನುದಾನದ ಕೊರತೆಯಿಂದ ಕೈಗೊಳ್ಳುವಲ್ಲಿ ವಿಳಂಬವಾಗುತ್ತದೆ ಎಂದು ಈ ಕಾಮಗಾರಿಗಳನ್ನು ಕಾವೇರಿ ನೀರಾವರಿ ನಿಗಮಕ್ಕೆ ವಹಿಸಬಹುದಾಗಿದೆ ಎಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅಭಿಪ್ರಾಯವನ್ನು ನೀಡಿದ್ದಾರೆ. ಹಾಗೆಯೇ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕೊಡಗು ಜಿಲ್ಲೆಯ ಸಣ್ಣ ನೀರಾವರಿ ಕಾಮಗಾರಿಗಳಾದ ಅಣೆಕಟ್ಟು, ಪಿಕಪ್ ಹಾಗೂ ಕಿಂಡಿ ಅಣೆಕಟ್ಟುಗಳ ಹಾಗೂ ಅವುಗಳ ನಾಲೆಗಳನ್ನು ಅಭಿವೃದ್ಧಿಪಡಿಸಲು 400.00 ಲಕ್ಷ ರೂ.ಗಳ ಅನುದಾನ ಬೇಕಾಗುತ್ತದೆ ಎಂದು 2004–05ನೇ ಸಾಲಿಗೆ ಸಣ್ಣ ನೀರಾವರಿಯ ಲೆಕ್ಕ ಶೀರ್ಷಿಕೆ 4702 ರಡಿ ಅನುದಾನ ಒದಗಿಸಿರುವುದಿಲ್ಲ ಮತ್ತು ಈ ಕಾಮಗಾರಿಗಳಿಗೆ ನಬಾರ್ಡ್ ಧನಸಹಾಯ ಪಡೆಯಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸುತ್ತಾ ಈ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸುವುದು ಸೂಕ್ತ ಎಂದು ಅಭಿಪ್ರಾಯ ನೀಡಿದ್ದಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 218 ಕೆಜಿದು 2003, ಬೆಂಗಳೂರು, ದಿನಾಂಕ: 10ನೇ ಮೇ 04**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅನುಬಂಧದಲ್ಲಿ ತಿಳಿಸಿರುವ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ವಹಿಸಲಾಗಿದೆ.

**ಷರತ್ತುಗಳು:**

1) ಈಗಾಗಲೇ ನಿಯಮಾನುಸಾರ ಗುತ್ತಿಗೆ ಕರೆದು ಕಾಮಗಾರಿಯನ್ನು ಗುತ್ತಿಗೆದಾರರಿಗೆ ವಹಿಸಿದ್ದಲ್ಲಿ ಆ ಬಗ್ಗೆ ನಿಯಮಾವಳಿಗಳಂತೆ ಕ್ರಮ ಕೈಗೊಳ್ಳುವುದು ಹಾಗೂ ಗುತ್ತಿಗೆದಾರರೊಂದಿಗೆ ಯಾವುದೇ ರೀತಿಯ ವ್ಯಾಜ್ಯ ಉಂಟಾಗದಂತೆ ಕ್ರಮ ತೆಗೆದುಕೊಳ್ಳುವುದು.
2) ಈ ಕಾಮಗಾರಿಗಳಿಗೆ ಸಂಬಂಧಪಟ್ಟಂತೆ ಗುತ್ತಿಗೆದಾರರಿಗೆ ಹಾಗೂ ಇತರರಿಗೆ ಪಾವತಿಸಬೇಕಾದ ಯಾವುದೇ ಬಿಲ್ಲುಗಳು ಬಾಕಿ ಇದ್ದಲ್ಲಿ ಸದರಿ ಹಣವನ್ನು ನಿಗಮವು ಪಾವತಿಸತಕ್ಕದ್ದು.
3) ಈ ಕಾಮಗಾರಿಗಳನ್ನು ಸಂಬಂಧಪಟ್ಟ ಸಣ್ಣ ನೀರಾವರಿ ವಿಭಾಗಗಳ ಮೂಲಕವೇ ಕಾರ್ಯಗತಗೊಳಿಸುವುದು..
4) ಕಾಮಗಾರಿ ಪೂರ್ಣಗೊಂಡ ನಂತರ ಆ ಕಾಮಗಾರಿಗಳನ್ನು ಸಣ್ಣ ನೀರಾವರಿ ಇಲಾಖೆಗೆ ಹಿಂತಿರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎನ್. ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಸರ್ಕಾರದ ಆದೇಶ ಸಂಖ್ಯೆ: ಸನೀಇ ೨೧೮ ಕೆಜಿದು ೨೦೦೩ಕ್ಕೆ ಅನುಬಂಧ**

ಕಾವೇರಿ ನೀರಾವರಿ ನಿಗಮಕ್ಕೆ ಕಾರ್ಯಗತಗೊಳಿಸಲು ವಹಿಸುವ ಸಣ್ಣ ನೀರಾವರಿ ಕಾಮಗಾರಿಗಳ ಪಟ್ಟಿ

**ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು:**

1. ಮುತ್ತುರಾಯನಕೆರೆ ಪೋಷಕ ಕಾಲುವೆ ನಿರ್ಮಾಣ
2. ಕೆಸ್ತೂರು ಏತ ನೀರಾವರಿ ಯೋಜನೆ ನಿರ್ಮಾಣ
3. ಹೆಬ್ಬೆರಳು ಕೆರೆ ಹೂಳು ತೆಗೆಯುವುದು
4. ಕಡಲೂರು ಕೆರೆ ಹೂಳು ತೆಗೆಯುವುದು

**ಬೆಂಗಳೂರು ಗ್ರಾಮಾಂತರ ಜಿಲ್ಲೆ:**

1. ಮಾಗಡಿ ತಾಲ್ಲೂಕಿನ ಮಾಡಬಾಳು ಹೋಬಳಿ ಕೋರಮಂಗಲ ಬಳಿ ಶ್ರೀರಂಗ ಅಣೆ ಹೊಸಕೆರೆ ಯೋಜನೆ
2. ತೂಬಿನ ಕೆರೆ ಬಳಿ ಹೊಸಕೆರೆ ಯೋಜನೆ
3. ಎಲೆಮಲ್ಲಪ್ಪಶೆಟ್ಟಿ ಕೆರೆಯಿಂದ ಹೊಸಕೋಟೆ ದೊಡ್ಡಕೆರೆ ಏತ ನೀರಾವರಿ ಯೋಜನೆ

**ಕೊಡಗು ಜಿಲ್ಲೆ, ಮಡಿಕೇರಿ ತಾಲ್ಲೂಕು:**

1. ಪೆರೂರು ಚಿರುಹೊಳೆ ಅಣೆಕಟ್ಟು
2. ಮರಗೋಡು ಗ್ರಾಮ ಕಟಾರಿ ಬಳಿ ಬಂದಾರ
3. ಅಯ್ಯನಗೆರೆ ಬಂದಾರ
4. ಅರವತ್ತೊಕ್ಲು ಪೆರಾತ ಬಂದಾರ
5. ಮುಟ್ಲು ಬಂದಾರ

**ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು:**

1. ಶಾಂತವೇರಿ ಅಣೆಕಟ್ಟು
2. ಅರೆಯೂರು ಎಲಕನೂರು ಅಣೆಕಟ್ಟು
3. ನೇರುಗಲಲೆ ಅಣೆಕಟ್ಟು
4. ಮಾದಲಾಪುರ ಅಣೆಕಟ್ಟು
5. ನೇಗಳ್ಳಿ-ಕಾರ್ಕಳ್ಳಿ ಅಣೆಕಟ್ಟು
6. ಅಭಯತ್ ಮಂಗಲ ಬಂದಾರ
7. ಇ ಗೂರು ಬಂದಾರ
8. ಶುಂಠಿಹಳ್ಳ ಬಂದಾರ
9. ದೊಡ್ಡಬಬ್ಬೂರು ಬಂದಾರ
10. ಅಡಿನಾಡೂರು ಬಂದಾರ
11. ದೊಡ್ಡಳ್ಳಿಕಟ್ಟೆ ಬಂದಾರ

**ಕೊಡಗು ಜಿಲ್ಲೆ, ವೀರಾಜಪೇಟೆ ತಾಲ್ಲೂಕು:**

1. ಹೊನ್ನಿಕೊಪ್ಪ ಅಣೆಕಟ್ಟು
2. ದೇವನೂರು ಅಣೆಕಟ್ಟು
3. ಬಾಲಾಜಿ ಅಣೆಕಟ್ಟು
4. ಹತೂರು ಬಂದಾರ
5. ಜಗಳೇತೋಡು ಬಂದಾರ
6. ಚಿಕ್ಕೆಸೊಡಲೂರು ಕಿಂಡಿ ಅಣೆಕಟ್ಟು

**ಎಂ. ಎನ್. ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್.513

**ಕಾರ್ಮಿಕ ಸಚಿವಾಲಯ**

**ವಿಷಯ :** ಡಾ: ಎಂ. ದಿವಾಕರ್, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇವರು ಕರ್ತವ್ಯದಿಂದ ಅನಧಿಕೃತ ಗೈರುಹಾಜರಾದ ಬಗ್ಗೆ ಸರ್ಕಾರಿ ಕೆಲಸದಿಂದ ತೆಗೆದುಹಾಕುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಕ್ರಮಾಂಕ ಕಾಇ 852 ಎಲ್‌ಎಸ್‌ಐ 2000, ದಿನಾಂಕ: 30.03.2001.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್:ಇವಿ: 41: 2003-04, ದಿನಾಂಕ: 28.2.2004

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಡಾ: ಎಂ. ದಿವಾಕರ್, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇಲ್ಲಿಗೆ 2 ವರ್ಷಗಳ ಖಾಯಂಪೂರ್ವ ಸೇವೆಯ ಮೇಲೆ ವಿಮಾ ವೈದ್ಯಾಧಿಕಾರಿಯಾಗಿ ನೇಮಕ ಮಾಡಲಾಗಿದ್ದು ಅದರಂತೆ ಸದರಿ ವೈದ್ಯರು ದಿನಾಂಕ: 24.04.2001 ರಂದು ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇಲ್ಲಿ ಕರ್ತವ್ಯಕ್ಕೆ ಸೇವಾ ವರದಿ ಮಾಡಿಕೊಂಡಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಎಂ. ದಿವಾಕರ್, ಇವರು ದಿನಾಂಕ: 3.3.2003 ರಿಂದ 11.4.2003ರ ವರೆಗೆ 40 ದಿನಗಳ ಗಳಿಕೆ ರಜೆ ಮತ್ತು ದಿನಾಂಕ: 1.3.2003, 2.3.03 ಹಾಗೂ 12.4.03 ರಿಂದ 15.4.03ರವರೆಗೆ 6 ದಿನಗಳ ಅನುಮತಿ ರಜೆ ಮಂಜೂರು ಮಾಡಲು ಕೋರಿದ್ದುದಾಗಿಯೂ ಇವರು ದಿನಾಂಕ: 16.4.2003 ರಂದು ಸೇವೆಗೆ ಹಾಜರಾಗದೇ ಇರುವುದನ್ನು ಗಮನಿಸಿ ದಿನಾಂಕ: 30.5/ 18.6.03, 28.7/8.8.03 ಮತ್ತು 23.8/ 5.9.03 ರಂದು ಹೊರಡಿಸಲಾದ ಸೂಚನಾ ಪತ್ರಗಳಲ್ಲಿ ಇವರ ಗೈರುಹಾಜರಾತಿಯಿಂದ ವಿಮಾರೋಗಿಗಳಿಗೆ ಹಾಗೂ ಚಿಕಿತ್ಸಾಲಯದ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದರಿಂದ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಸೂಚನಾ ಪತ್ರಗಳನ್ನು ವೈದ್ಯಾಧಿಕಾರಿಗಳ ಇತ್ತೀಚಿನ ಖಾಯಂ ವಿಳಾಸಕ್ಕೆ ನೊಂದಾಯಿತ ಅಂಚೆ ಸ್ವೀಕೃತಿ ಪತ್ರದ ಮೂಲಕ ಜಾರಿ ಮಾಡಿರುವುದಾಗಿ ಹಾಗೂ ಈ ರೀತಿ ಜಾರಿ ಮಾಡಲಾದ ಎಲ್ಲಾ ಸೂಚನಾ ಪತ್ರಗಳನ್ನು ವೈದ್ಯರ ಹತ್ತಿರದ ಸಂಬಂಧಿಕರು ಸ್ವೀಕರಿಸಿ, ಸ್ವೀಕೃತಿ ಪತ್ರಗಳನ್ನು ಕಳುಹಿಸಿರುತ್ತಾರೆಂದು ತಿಳಿಸಿರುತ್ತಾರೆ. ಡಾ: ಎಂ. ದಿವಾಕರ್ ಇವರಿಗೆ ದಿನಾಂಕ: 3.3.03 ರಿಂದ 11.4.03ರ ವರೆಗಿನ 40 ದಿನಗಳ ಗಳಿಕೆ ರಜೆ ಮತ್ತು ಅನುಮತಿ ರಜೆಗಳನ್ನು ಇಲಾಖಾ ವತಿಯಿಂದ ಮಂಜೂರು ಮಾಡಿರುವುದಿಲ್ಲವೆಂದು ತಿಳಿಸುತ್ತಾ ವೈದ್ಯರು ಖಾಯಂಪೂರ್ವ ಸೇವಾ ಅವಧಿಯಲ್ಲೇ ರಜೆ ಹಾಕುವುದರ ಮೂಲಕ ಮತ್ತು ರಜಾಅವಧಿ ಮುಗಿದ ನಂತರವೂ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು ವೈದ್ಯರು ಸರ್ಕಾರಿ ಸೇವೆಯಲ್ಲಿ ಸೇವಾ ಮನೋಭಾವನೆ ಇಲ್ಲದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆಂದು, ವಿಮಾದಾರ ರೋಗಿ ಮತ್ತು ಅವರ ಕುಟುಂಬದವರಿಗೆ ತೊಂದರೆಯಾಗುತ್ತಿರುವುದರಿಂದ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿದ ಅಂತಿಮ ಸೂಚನಾ ಪತ್ರವನ್ನು ಸ್ವೀಕರಿಸಿಯೂ ಸಹ ವೈದ್ಯರು ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ ಮೇಲಾಧಿಕಾರಿಗಳ ಆದೇಶವನ್ನು ಉದ್ದೇಶಪೂರ್ವಕವಾಗಿ ತಿರಸ್ಕರಿಸಿರುವುದು ಸ್ಪಷ್ಟವಾಗಿ ಕಂಡುಬರುವುದರಿಂದ ಡಾ: ಎಂ. ದಿವಾಕರ್, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವಾವಧಿ) ನಿಯಮಗಳು 1977ರ ನಿಯಮ 6 ರನ್ವಯ ದಿನಾಂಕ: 1.3.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕುವ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 175 ಎಲ್‌ಎಸ್‌ಐ 2004, ಬೆಂಗಳೂರು, ದಿನಾಂಕ: 20ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಡಾ: ಎಂ. ದಿವಾಕರ್, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್, ಮಂಗಳೂರು ಇವರು ಖಾಯಂ ಪೂರ್ವಸೇವಾ ಅವಧಿಯಲ್ಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಮತ್ತು ಸರ್ಕಾರಿ ಸೇವೆಯಲ್ಲಿ ಕರ್ತವ್ಯ ನಿಷ್ಠೆ ಹೊಂದಿಲ್ಲದಿರುವುದರಿಂದ, ಇವರು ನೇಮಕಗೊಂಡ ಪತ್ರಾಂಕಿತ ಅಧಿಕಾರಿಯ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ ಸೇವಾ ಅವಧಿ) ನಿಯಮಗಳು 1977ರ ನಿಯಮ 5 (1) (ಬಿ) ರನ್ವಯ ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 01.03.2003 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್. 525 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು).

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು (ಪ್ರಸ್ತುತ ನಿವೃತ್ತ), ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ :**
1. ಹಿಂದಿನ ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಸಿಎ:110: 2000-01, ದಿನಾಂಕ: 15.11.2002.
2. ದಿನಾಂಕ: 7.8.2003ರ ತಿಳುವಳಿಕೆ ಪತ್ರ ಸಂಖ್ಯೆ: ಆರ್‌ಡಿ 25 ಎಡಿಇ 2003.
3. ಶ್ರೀ ಎಂ.ವಿ. ಲಕ್ಷ್ಮೀಪತಿರೆಡ್ಡಿ, ರವರ ದಿನಾಂಕ: 4.9.2003ರ ಲಿಖಿತ ಸಮಜಾಯಿಸಿ.

**ಪ್ರಸ್ತಾವನೆ:**

ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು ಇವರು ಸದರಿ ತಾಲ್ಲೂಕಿನಲ್ಲಿ ಸಣ್ಣ ಕಾರ್ಯನಿರ್ವಹಿಸುತ್ತಿದ್ದಾಗ, ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ ಕಲಂ 107ರ ಅನ್ವಯ ಸ್ವೀಕರಿಸಿದ ಪ್ರಥಮ ವರ್ತಮಾನ ವರದಿಯ ಮೇಲೆ ಕಾರ್ಯೋನ್ಮುಖರಾಗಿ ಕೂಡಲೇ ಕ್ರಮ ಜರುಗಿಸದೆ ಇರುವ ಕಾರಣದಿಂದ ಚಿಂತಾಮಣಿ ತಾಲ್ಲೂಕು ಅಂಬಾಜಿದುರ್ಗ ಹೋಬಳಿ ಜಗತನಹಳ್ಳಿ ಗ್ರಾಮದಲ್ಲಿ ನಡೆದ ಗಲಭೆಯಲ್ಲಿ ಒಬ್ಬ ವ್ಯಕ್ತಿಯ ಕೊಲೆ ಆಗಿರುವುದಕ್ಕೆ ಕಾರಣರಾಗಿರುತ್ತಾರೆ ಎಂದು ಆಪಾದಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 15.11.2002ರ ಪತ್ರದಲ್ಲಿ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ-1 ರಿಂದ 4ರ ವರೆಗೆ) ತಯಾರಿಸಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 07.08.2003 ರಂದು ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕನುಗುಣವಾಗಿ ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ ಅವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 04.09.2003ರ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಅವರ ವಿರುದ್ಧದ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆಯೆಂದು ತಿಳಿಸಿ ಆ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಪ್ರಸ್ತಾಪಿತ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 03 ಎಡಿಇ 2004, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ-11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ವಿ.ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ: 643, 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ-11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೋಲಾರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5000-(ಐದು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.03.02ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಕೋಲಾರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11 (ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 527 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ,(ಸೇವೆಗಳು-3).

**ವಿಷಯ :** ಶ್ರೀ ಹೆಚ್. ಸಿ. ಸ್ವಾಮಿ, ಹಿಂದಿನ ತಹಶೀಲ್ದಾರ್, ಕೆ. ಆರ್. ನಗರ ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರನ್ನು ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 15.12.2003ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 58 ಎಡಿಇ 2001.

**ಪ್ರಸ್ತಾವನೆ:**

ಶ್ರೀ ಹೆಚ್. ಸಿ. ಸ್ವಾಮಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ಇವರು ಈ ಹಿಂದೆ ಕೆ. ಆರ್. ನಗರ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಸುತ್ತೋಲೆ ಸಂಖ್ಯೆ: ಆರ್‌ಡಿ 07 ಎಲ್‌ಜಿಪಿ 95, ದಿನಾಂಕ: 7.6.1999ರ ಪ್ರಕಾರ ಅನ್ಯಕಾಂತ ಮಂಜೂರಾತಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಅರ್ಜಿ ಸಲ್ಲಿಸಿದ ದಿನಾಂಕದಿಂದ 45 ದಿನದೊಳಗೆ ಅನ್ಯಕಾಂತ ಮಂಜೂರಾತಿ ಆದೇಶ ನೀಡಬೇಕೆಂದು ಸರ್ಕಾರದ ಸ್ಪಷ್ಟ ನಿರ್ದೇಶನವಿದ್ದರೂ ಸಹ ಕೆ. ಆರ್. ನಗರ ತಾಲ್ಲೂಕಿನ 3 ಅನ್ಯಕಾಂತ ಪ್ರಕರಣಗಳಲ್ಲಿ ಅರ್ಜಿಸಲ್ಲಿಸಿದ 45 ದಿನಗಳ ನಂತರ,

ಮಂಜೂರಾತಿಗೆ ಸಕ್ಷಮ ಪ್ರಾಧಿಕಾರಿಗಳಾದ ಉಪ ವಿಭಾಗಾಧಿಕಾರಿ, ಹುಣಸೂರು ರವರಿಗೆ ಶಿಫಾರಸ್ಸು ಮಾಡಿ ಡೀಮ್ಡ್ ಕನ್ವರ್ಷನ್ ಆಗಲು ಅವಕಾಶ ಕಲ್ಪಿಸಿ ಕರ್ತವ್ಯಲೋಪವೆಸಗಿ 1966ರ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳ ನಿಯಮ 3 (i) (ii) (iii) ಅನ್ನು ಉಲ್ಲಂಘಿಸಿದ್ದು, ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ತದನಂತರ ಪ್ರಸ್ತಾವನೆಯನ್ನು ಸರಕಾರವೂ ಮರು ಪರಿಶೀಲಿಸಿದ್ದು ಶ್ರೀ ಹೆಚ್. ಸಿ. ಸ್ವಾಮಿ, ಹಿಂದಿನ ತಹಶೀಲ್ದಾರ್ ಕೆ.ಆರ್.ನಗರ ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರು ಕರ್ತವ್ಯದಲ್ಲಿ ವಿಳಂಬಧೋರಣೆಯನ್ನು ಅನುಸರಿಸಿರುವುದೇ ಹೊರತು, ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವಾದ ಕಾರಣ, ಸದರಿ ಅಧಿಕಾರಿಯನ್ನು ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಎಡಿಇ 2001, ಬೆಂಗಳೂರು ದಿನಾಂಕ: 15ನೇ ಮೇ 2004**

ಪ್ರಸ್ತಾವನೆಯಲ್ಲಿ ಪರಿಶೀಲಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್. ಸಿ. ಸ್ವಾಮಿ, ಹಿಂದಿನ ತಹಶೀಲ್ದಾರ್, ಕೆ.ಆರ್. ನಗರ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ದಿನಾಂಕ: 15.12.2003ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 58 ಎಡಿಇ 2001ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಪ್ರಸ್ತಾಪಿತ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಶ್ರೀ ಹೆಚ್. ಸಿ. ಸ್ವಾಮಿ, ತಹಶೀಲ್ದಾರ್, ಇವರ ವಿರುದ್ಧ ಈ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 528

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ,(ಸೇವೆಗಳು-3).

**ವಿಷಯ :** ಶ್ರೀ ಸಿ. ಎಂ. ಹಿರೇಮಠ, ತಹಶೀಲ್ದಾರ್, ಲಿಂಗಸುಗೂರು ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು ರಾಯಚೂರು ಜಿಲ್ಲೆ, ರಾಯಚೂರು ಇವರ ಪತ್ರ ಸಂಖ್ಯೆ: ಕಂದಾಯ: ಸಿಸಿಎ:19:2002-03, ದಿನಾಂಕ: 1.2.2003.
2. ದಿನಾಂಕ: 8.10.03ರ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 14 ಎಡಿಇ 2003.
3. ಶ್ರೀ ಸಿ. ಎನ್. ಹಿರೇಮಠ ರವರ ದಿನಾಂಕ: 18.10.03ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಶ್ರೀ ಸಿ. ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು ತಾಲ್ಲೂಕು ಇವರು ಜಾತಿ ಪ್ರಮಾಣ ಪತ್ರ ನೀಡುವಲ್ಲಿ ಶ್ರೀ ಬಸವರಾಜು ತಂದೆ ಹನುಮಂತರಾಜು, ಈಚನಾಳ ಗ್ರಾಮ, ರಾಯಚೂರು ಜಿಲ್ಲೆ ಎಂಬುವವರಿಗೆ "III-ಎ" ರಡಿಯಲ್ಲಿ ನೀಡಬೇಕಾಗಿದ್ದು, ಜಾತಿ ಪ್ರಮಾಣ ಪತ್ರದ ಮೇಲೆ ತಮ್ಮ ಕೈಬರಹದಿಂದ "III-ಬಿ" ಎಂದು ತಿದ್ದುಪಡಿ ಮಾಡಿ ಕರ್ತವ್ಯಲೋಪ ಎಸಗಿರುತ್ತಾರೆಂದು, ಇನ್ನೊಂದು ಪ್ರಕರಣದಲ್ಲಿ ಕುಮಾರಿ ಗಿರಿಲಿಂಗಮ್ಮ ತಂದೆ ಕೆ. ಎನ್. ನಾರಾಯಣ ಲಿಂಗಸಗೂರು ಇವರಿಗೆ ಪ್ರಮಾಣ ಪತ್ರ ನೀಡಲು ಅಕ್ರಮ ಸಂಭಾವನೆಯನ್ನು ನೀಡುವಂತೆ ಒತ್ತಾಯಿಸಿ, ಸದರಿ ವಿಷಯಕ್ಕೆ ಸಂಬಂಧಪಟ್ಟ ಮೂಲ ಕಡತವನ್ನು ಅವರು ತಮ್ಮ ಮನೆಯಲ್ಲಿ ಇರಿಸಿಕೊಂಡಿದ್ದು, ಉದ್ದೇಶಪೂರ್ವಕವಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ತಾಲ್ಲೂಕು ಕಛೇರಿಯಲ್ಲಿ ಹಾಜರುಪಡಿಸಿರುವುದಿಲ್ಲವೆಂದು, ರಾಯಚೂರು ಜಿಲ್ಲಾಧಿಕಾರಿಯವರು ವರದಿ ಮಾಡಿದ ಮೇರೆಗೆ ಹಾಗೂ ಮತ್ತೊಂದು ಪ್ರಕರಣದಲ್ಲಿ, ಶ್ರೀ ಮಲ್ಲಿಕಾರ್ಜುನ ತಂದೆ ಕೆ.ಎಸ್.ನಾರಾಯಣರಾವ್, ಲಿಂಗಸಗೂರು ಇವರಿಗೆ ಜಾತಿ ಪ್ರಮಾಣ ಪತ್ರ ನೀಡುವಲ್ಲಿ ಸುಮಾರು 3 ತಿಂಗಳುಗಳಿಂದ ವಿಳಂಬ ಮಾಡಿ ನೀಡಿರುವುದಾಗಿ ಹಾಗೂ ಶ್ರೀ ಮಲ್ಲಿಕಾರ್ಜುನ ರವರ ಸಹೋದರಿಗೆ ಸಲ್ಲದ ಕಾರಣಗಳಿಂದ ಜಾತಿ ಪ್ರಮಾಣ ನೀಡಲು ಸಾಧ್ಯವಿಲ್ಲವೆಂದು ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಉದ್ದೇಶಪೂರ್ವಕವಾಗಿ ಶ್ರೀ ಹಿರೇಮಠ ರವರು ತಹಶೀಲ್ದಾರ್ ಕಛೇರಿಗೆ ಹಾಜರುಪಡಿಸದೆ ಕರ್ತವ್ಯಲೋಪ ಎಸಗಿರುವ ಕಾರಣದಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ರಾಯಚೂರು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1 ರಿಂದ 4 ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಅನುಗುಣವಾಗಿ ಶ್ರೀ ಸಿ. ಎಂ. ಹಿರೇಮಠ ರವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಅವರ ವಿರುದ್ಧದ ಎಲ್ಲಾ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆಯೆಂದು ತಿಳಿಸಿ ಆ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಸದರಿ ಆರೋಪಗಳಿಂದ ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ;

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 14 ಎಡಿಇ 2003, ಬೆಂಗಳೂರು, ದಿನಾಂಕ: 7ನೇ ಮೇ 2004**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ. ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಲಿಂಗಸಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವೀಹಾಳ್, ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5000- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.02ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ರಾಯಚೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 529 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ,(ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳು ನಡೆಸುವ ಕಾಲೇಜುಗಳ ಸಂಯೋಜನಾ ಶುಲ್ಕದಲ್ಲಿ ರಿಯಾಯಿತಿ ಬಗ್ಗೆ ಆದೇಶ.

**ಓದಲಾಗಿದೆ :** 1. ದಿನಾಂಕ: 17.07.1996 ಸಂಖ್ಯೆ: ಇಡಿ 33 ಯುಆರ್‌ಸಿ 96ರ ಸರ್ಕಾರಿ ಪತ್ರ.

2. ದಿನಾಂಕ: 02.08.1996 ಇಡಿ 80 ಯುಎಸ್‌ವಿ 96ರ ಸರ್ಕಾರಿ ಪತ್ರ.

**ಪೀಠಿಕೆ:**

1) ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳು ನಡೆಸುವ ಕಾಲೇಜುಗಳ ಸಂಯೋಜನಾ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿಯನ್ನು ನೀಡುವ ವಿಚಾರವನ್ನು ದಿನಾಂಕ: 22.06.1996 ರಂದು ಜರುಗಿದ ಅಂತರ ವಿಶ್ವವಿದ್ಯಾಲಯ ಮಂಡಳಿಯ ಸಭೆಯಲ್ಲಿ ಚರ್ಚಿಸಲಾಗಿತ್ತು. ಸದರಿ ಅಂತರ ವಿಶ್ವವಿದ್ಯಾಲಯ ಮಂಡಳಿಯ ಸಭೆಯ ನಡವಳಿಯ ಶಿಫಾರಸ್ಸು ಸಂಖ್ಯೆ: 15:96ರಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳ ಕಾಲೇಜುಗಳಿಂದ ವಸೂಲಾತಿ ಮಾಡುವ ಸಂಯೋಜನಾ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡಬಹುದೆಂದು ನಿರ್ಣಯಿಸಲಾಗಿದೆ. ಈ ನಿರ್ಣಯವನ್ನು ಶೀಘ್ರವಾಗಿ ಅನುಷ್ಠಾನಗೊಳಿಸುವಂತೆ ದಿನಾಂಕ: 02.08.1996 ಸಂಖ್ಯೆ: ಇಡಿ 80 ಯುಎಸ್‌ವಿ 96ರ ಸರ್ಕಾರಿ ಪತ್ರದಲ್ಲಿ ಎಲ್ಲಾ ವಿಶ್ವವಿದ್ಯಾಲಯಗಳಿಗೆ ಸೂಚಿಸಲಾಗಿತ್ತು.

2) ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳು ನಡೆಸುವ ಕಾಲೇಜುಗಳ ಸಂಯೋಜನಾ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡುವುದಕ್ಕೆ ಸಂಬಂಧಿಸಿದ ಅಂತರ ವಿಶ್ವವಿದ್ಯಾಲಯ ಮಂಡಳಿಯ ಈ ನಿರ್ಣಯವನ್ನು ಕೆಲವು ವಿಶ್ವವಿದ್ಯಾಲಯಗಳು ಮಾತ್ರ ಕಾರ್ಯಗತಗೊಳಿಸಿದ್ದು ಇನ್ನೂ ಕೆಲವು ವಿಶ್ವವಿದ್ಯಾಲಯಗಳು ಕಾರ್ಯಗತಗೊಳಿಸಬೇಕಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಯ ಕೆಲವು ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳು ಸಂಯೋಜನಾ ಶುಲ್ಕದಲ್ಲಿ ಶೇ. 50ರಷ್ಟು ರಿಯಾಯಿತಿ ನೀಡುವ ಈ ನಿರ್ಣಯವನ್ನು ತ್ವರಿತವಾಗಿ ಕಾರ್ಯಗತಗೊಳಿಸುವಂತೆ ಒತ್ತಾಯಿಸಿವೆ.

3) ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡಗಳು ನಡೆಸುವ ಕಾಲೇಜುಗಳ ಸಂಯೋಜನಾ ಶುಲ್ಕದಲ್ಲಿ ರಿಯಾಯಿತಿ ನೀಡುವ ಕ್ರಮವು ಒಂದು ಉತ್ತಮ ಯೋಜನೆಯಾಗಿದ್ದು ಈ ನಿರ್ಣಯವನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 21 ಯುಬಿವಿ 2004, ಬೆಂಗಳೂರು ದಿನಾಂಕ: 15ನೇ ಮೇ 2004**

4) ದಿನಾಂಕ: 22.06.1996ರ ಅಂತರ ವಿಶ್ವವಿದ್ಯಾಲಯ ಮಂಡಳಿಯ ಸಭೆಯ ಶಿಫಾರಸ್ಸು ಸಂಖ್ಯೆ: 15:96ರಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳ ಕಾಲೇಜುಗಳಿಂದ ವಸೂಲು ಮಾಡುವ ಸಂಯೋಜನಾ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡಬಹುದೆಂಬ ನಿರ್ಣಯವನ್ನು ಎಲ್ಲಾ ವಿಶ್ವವಿದ್ಯಾಲಯಗಳು ಜಾರಿಗೊಳಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 530 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ,(ವಿಶ್ವವಿದ್ಯಾಲಯ).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಅಲ್ಲಾಭಕ್ಷ, ತಹಶೀಲ್ದಾರ್, ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 32 ಎಡಿಇ 2004, ಬೆಂಗಳೂರು, ದಿನಾಂಕ: 15ನೇ ಮೇ 2004**

ಶ್ರೀ ಅಲ್ಲಾ ಭಕ್ಷ, ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಅಧಿಕಾರ ವ್ಯಾಪ್ತಿ ಮೀರಿ ಅಕ್ರಮವಾಗಿ ಖಾತೆ ಬದಲಾವಣೆಗಳನ್ನು ಮಾಡಿರುವ ಹಿನ್ನೆಲೆಯಲ್ಲಿ, ತಹಶೀಲ್ದಾರ್‌ರ ಈ ಕ್ರಮವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1) (ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ತಹಶೀಲ್ದಾರ್‌ರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 531 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ,(ಸೇವೆಗಳು-3).

**ವಿಷಯ :** ಚುನಾವಣಾ ಕಾರ್ಯನಿರ್ವಹಿಸುವಲ್ಲಿ ನಿರ್ಲಕ್ಷತೆ ತೋರಿರುವ ಹಾಗೂ ಚುನಾವಣಾ ಕೆಲಸಕ್ಕೆ ತೊಂದರೆ ಮಾಡಿರುವ ಆಪಾದನೆಗಳ ಮೇಲೆ ಶ್ರೀ ಹೆಚ್. ಪಿ. ನಾಗರಾಜ್, ತಹಶೀಲ್ದಾರ್, ಸಾಗರ ಇವರ ವಿರುದ್ಧ ಇಲಾಖಾ ವಿಚಾರಣೆ-ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಈಎಲ್‌ಎನ್ (2) ಸಿಆರ್ 20: 2003-04, ದಿನಾಂಕ: 10.5.2004.
2. ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಚುನಾವಣೆಗಳು) ಇವರ ಪತ್ರ ಸಂಖ್ಯೆ: ಸಿಆಸುಇ 40 ಜೆಸಿಇಓ 04, ದಿನಾಂಕ: 11.5.2004.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳು ಈ ಮೇಲೆ ಓದಲಾದ (1)ರ ಪತ್ರದಲ್ಲಿ ಸಾಗರ ತಹಶೀಲ್ದಾರ್‌ರಾದ ಶ್ರೀ ಹೆಚ್.ಪಿ. ನಾಗರಾಜ್, ಇವರು ದಿನಾಂಕ: 10.3.2004 ರಂದು ಕಾರ್ಯಭಾರ ವಹಿಸಿಕೊಂಡ ದಿನದಿಂದಲೂ ಚುನಾವಣಾ ಕೆಲಸದಲ್ಲಿ ಆಸಕ್ತಿ ವಹಿಸದೆ ಇದ್ದುದಾಗಿ ಸರ್ಕಾರಕ್ಕೆ ಹಾಗೂ ಮುಖ್ಯ ಚುನಾವಣಾ ಅಧಿಕಾರಿಗಳಿಗೆ ವರದಿ ಮಾಡಿ ಸದರಿ ತಹಶೀಲ್ದಾರ್‌ರು ದಿನಾಂಕ: 8.5.04, 9.5.04 ಮತ್ತು 10.5.04 ರಂದು ಚುನಾವಣಾ ಕೆಲಸಕಾರ್ಯಗಳನ್ನು ನಿರ್ಲಕ್ಷಿಸಿ ಅನಧಿಕೃತವಾಗಿ ಗೈರು ಹಾಜರಾಗಿ ಚುನಾವಣಾ ಕೆಲಸಕ್ಕೆ ತುಂಬ ಅಡಚಣೆ ಉಂಟು ಮಾಡಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು ಚುನಾವಣಾ ಸಿಬ್ಬಂದಿಗೆ ತರಬೇತಿ ನೀಡುವ ಹಾಗೂ ಚುನಾವಣೆಯ ಇತರ ಕೆಲಸಗಳನ್ನು ಸಹ ಸುಸೂತ್ರವಾಗಿ ನಡೆಯಲು ಸಹಾಯಕವಾಗದೆ ಚುನಾವಣೆ ಕಾರ್ಯನಿರ್ವಹಿಸುವಲ್ಲಿ ಅಸಡ್ಡೆತನ ಹಾಗೂ ನಿರ್ಲಕ್ಷತನ ತೋರಿದ್ದು, ಇದರಿಂದಾಗಿ ಮುಂಬರುವ ಮತ ಎಣಿಕೆ ಕೆಲಸದಲ್ಲಿಯೂ ಸಹ ಇವರಿಂದ ಅಡಚಣೆ ಉಂಟಾಗುವ ಸಾಧ್ಯತೆಯಿದ್ದು ಕೂಡಲೇ ಈ ಅಧಿಕಾರಿಯನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಿರುತ್ತಾರೆ. ಜೊತೆಗೆ ಶ್ರೀಮತಿ ಶಾಂತಿನಾಯಕ್, ಚುನಾವಣಾ ತಹಶೀಲ್ದಾರ್ ಇವರನ್ನು ತಾತ್ಕಾಲಿಕವಾಗಿ ಸಾಗರ ತಹಶೀಲ್ದಾರ್‌ರಾಗಿ ಅಧಿಕ ಪ್ರಭಾರದಲ್ಲಿಡಲು ಕೋರಿರುತ್ತಾರೆ.

"ಮುಖ್ಯ ಚುನಾವಣಾಧಿಕಾರಿಗಳೂ, ಬೆಂಗಳೂರು ಇವರು ಸಹ ಓದಲಾದ (2)ರ ಪತ್ರದಲ್ಲಿ ಜಿಲ್ಲಾಧಿಕಾರಿ ಶಿವಮೊಗ್ಗ ಇವರ ಸಲಹೆಗೆ ಅನುಮೋದನೆ ನೀಡುತ್ತಾ ಕೂಡಲೇ ಸದರಿ ಅಧಿಕಾರಿಯನ್ನು ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿರುತ್ತಾರೆ."

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಹೆಚ್. ಪಿ. ನಾಗರಾಜ್, ತಹಶೀಲ್ದಾರ್, ಸಾಗರ ಇವರ ಕರ್ತವ್ಯಚ್ಯುತಿಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಎಡಿಇ 2004, ಬೆಂಗಳೂರು, ದಿನಾಂಕ: 12ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ಪಿ. ನಾಗರಾಜ್, ತಹಶೀಲ್ದಾರ್, ಸಾಗರ, ಶಿವಮೊಗ್ಗ ಜಿಲ್ಲೆ ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಅನುಮತಿ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಮುಂದುವರೆದು ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಚುನಾವಣಾ ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಶಾಂತಿನಾಯಕ್ ಇವರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಾಗರ ತಾಲ್ಲೂಕಿನ ತಹಶೀಲ್ದಾರ್ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 532 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ,(ಸೇವೆಗಳು-3).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆಕುಕ 113 ಹೆಚ್‌ಎಸ್‌ಡಿ 2003 ಬೆಂಗಳೂರು, ದಿನಾಂಕ: 12ನೇ ಮೇ 2004

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 09.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ:42(1)98-99ರ ಪಟ್ಟಿಯಲ್ಲಿ ಗ್ರಾಮೀಣ ಕೃಪಾಂಕ ರಹಿತ ಆಯ್ಕೆಯಾಗಿರುವ ಪದವೀಧರ ದಂತ ವೈದ್ಯರಾದ ಡಾ: ಮೀನಾಕುಮಾರಿ ಎಸ್.ಡಿ., ನಂ.2603, 11ನೇ ಮುಖ್ಯ ರಸ್ತೆ, ಇ-ಬ್ಲಾಕ್, ರಾಜಾಜಿನಗರ 2ನೇ ಹಂತ, ಬೆಂಗಳೂರು-10, ಇವರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಂತ ಆರೋಗ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮೈಸೂರು ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು, ಇಲ್ಲಿಗೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18 (3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ದಂತ ಆರೋಗ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ವೈದ್ಯಕೀಯ ಮಹಾವಿದ್ಯಾಲಯದ ಪ್ರಾಂಶುಪಾಲರು, ಇವರುಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕುದು.

5. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸಬೇಕು.

6. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ;

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ: ಪ್ರಾಂಶುಪಾಲರು ಈಗ ನೇಮಕಾತಿ ಹೊಂದಿರುವ ವೈದ್ಯಾಧಿಕಾರಿಗಳ ಜನ್ಮ ದಿನಾಂಕಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ದೃಢೀಕೃತ ದಾಖಲಾತಿಗಳನ್ನು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಒಂದು ವಾರದೊಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಎಸ್. ಜಗದೀಶಯ್ಯ**

ಪಿ.ಆರ್. 533 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಒಇ 44 ಪೊಸಿಲಿ 99 ಬೆಂಗಳೂರು, ದಿನಾಂಕ: 12ನೇ ಮೇ 2004

ದಿನಾಂಕ: 1.1.2003ರ ಅಧಿಸೂಚನೆ ಸಂಖ್ಯೆ: ಒಇ 44 ಪೊಸಿಲಿ 99ನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2ರ ಉಪ ನಿಯಮ (3)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ, ಪೊಲೀಸ್ ಇಲಾಖೆಯಲ್ಲಿ ಕೆ.ಸಿ.ಎಸ್.ಆರ್.ರ ನಿಯಮ 32ರಡಿ ಸಹಾಯಕ ಆಡಳಿತಾಧಿಕಾರಿಗಳಾಗಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಶಾಖಾಧೀಕ್ಷಕರುಗಳನ್ನು ಅವರ ಹೆಸರಿನ ಎದುರಿಗೆ ತೋರಿಸಲಾಗಿರುವ

ದಿನಾಂಕಗಳಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಹಾಯಕ ಆಡಳಿತಾಧಿಕಾರಿಗಳ ಹುದ್ದೆಗಳಿಗೆ ಮುಂಬಡ್ತಿ ನೀಡಿ ಕ್ರಮಬದ್ಧಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಬಡ್ತಿ ನೀಡಲಾದ ದಿನಾಂಕ |
|---|---|---|
| | **ಶ್ರೀಯುತರು:ಶ್ರೀಮತಿ** | |
| 1. | ಬಿ. ಪಿ. ವಾಸುದೇವ | 31.10.91 |
| 2. | ಸೈಯದ್ ದಾವೂದ್ | 24.02.92 |
| 3. | ಕೆ. ದೊರೈರಾಜ್ | 11.06.92 |
| 4. | ಆರ್. ಬಿ. ದಾಸರ್ | 21.09.92 |
| 5. | ಎಂ. ಕ್ಯಾತಯ್ಯ | 16.10.92 |
| 6. | ಬಿ. ಬಿ. ಗೊಂದಾಲಿ | 30.05.93 |
| 7. | ಗೀತಾ ಎಸ್. ಬೇಲಿ | 07.10.93 |
| 8. | ಬಿ. ಕೆ. ಪ್ರಮೀಳಾ | 07.10.93 |
| 9. | ಎಂ. ಆರ್. ರಾಮರಾವ್ | 08.10.93 |
| 10. | ಎಂ. ನಾಗೇಶ್ವರಾಚಾರಿ | 09.10.93 |
| 11. | ಗುಲಾಬಿ ಸೋಮಯಾಜಿ | 20.10.93 |
| 12. | ಶ್ರೀಕಾಂತ್ ಹಮೀದ್‌ಖಾನಿ | 04.11.93 |
| 13. | ವಿಶ್ವನಾಥ್ | 15.11.93 |
| 14. | ಅಣ್ಣೇಗೌಡ | 18.11.93 |
| 15. | ಬಿ. ಕೆ. ರಾಮಪ್ರಸಾದ್ | 18.10.93 |
| 16. | ಟಿ. ನಾರಾಯಣಸ್ವಾಮಿ | 18.11.93 |
| 17. | ಶಂಕರ್ ಹೆಬ್ಬಾರ್ | 19.03.94 |
| 18. | ರಾಮೇಗೌಡ | 21.03.94 |
| 19. | ವಿ. ಎಸ್. ಹೊಂಬಾಳ್ | 27.04.94 |
| 20. | ಕೆ. ಜಯರಾಂ | 06.07.94 |
| 21. | ಸಿ. ಆರ್. ಗಂಗರಾಜು | 11.07.94 |
| 22. | ಎಸ್. ಕೆ. ರಂಗನಾಥ್ | 11.07.94 |
| 23. | ಹನುಮಂತಯ್ಯ | 03.08.94 |
| 24. | ಎಂ. ಬಿ. ಅಸೋಡ | 01.12.95 |
| 25. | ಐ. ಕೆ. ತಳವಾರ | 11.12.95 |
| 26. | ಭೀಮಣ್ಣ | 22.05.96 |
| 27. | ಎಸ್. ಬಿ. ದೇಯಣ್ಣನವರ್ | 22.05.96 |
| 28. | ಹೆಚ್. ಬಿ. ಪುಟ್ಟಸ್ವಾಮಿಗೌಡ | 27.05.96 |
| 29. | ಜಿ. ಬಿ. ಬೆನ್ನಾಡಿ | 15.07.96 |
| 30. | ವಿ. ಕಾಮಾಕ್ಷಿ | 19.07.96 |
| 31. | ಕೆ. ಅನಂತಪದ್ಮನಾಭ ಉಪಾಧ್ಯಾಯ | 28.11.96 |
| 32. | ಎಫ್. ಬಿ. ಕರಿಕಟ್ಟಿ | 09.07.98 |
| 33. | ವಿ. ಎಸ್. ಭಾಗ್ಯಲಕ್ಷ್ಮಿ | 10.07.98 |
| 34. | ಪುಟ್ಟವೆಂಕಟರಮಣ | 10.07.98 |
| 35. | ಎನ್. ಎಸ್. ಪಾಟೀಲ್ | 13.07.98 |
| 36. | ಎಂ. ಎಂ. ನಾಯಕ್ | 17.07.98 |
| 37. | ಬಿ. ಎಂ. ನಾರಾಯಣಸ್ವಾಮಿ | 20.07.98 |
| 38. | ಜೆ. ಬಿ. ಹಡಪದ್ | 27.07.98 |
| 39. | ಡಿ. ಎಸ್. ಪಾಟೀಲ್ | 03.08.98 |
| 40. | ಸಿ. ವನಿತರಾಜ್ | 12.08.98 |
| 41. | ಸಿ. ಎಸ್. ಮಲ್ಲಿಕಾರ್ಜುನ್ | 24.02.99 |
| 42. | ಮಲ್ಲಪ್ಪ ಪೂಜಾರಿ | 24.06.99 |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಬಡ್ತಿ ನೀಡಲಾದ ದಿನಾಂಕ |
|---|---|---|
| | **ಶ್ರೀಯುತರು:ಶ್ರೀಮತಿ** | |
| 43. | ಕೆ. ರುದ್ರಪ್ಪ | 24.06.99 |
| 44. | ಎಸ್. ರಾಮಣ್ಣ | 09.08.99 |
| 45. | ಮರಿಜೋಸೆಫ್ | 27.09.99 |
| 46. | ಎಂ. ಐ. ಹುಲ್ಯಾಳ್ | 03.07.2000 |
| 47. | ಎಂ. ಆರ್. ಚಂದ್ರಕಾಂತ್ | 05.07.2000 |
| 48. | ಎಸ್. ಆರ್. ಜಮಖಂಡಿ | 10.07.2000 |
| 49. | ಎಂ. ಎನ್. ಸುಧೀರ್‌ಕುಮಾರ್ | 03.07.2000 |
| 50. | ವಿ. ಮುರಳಿಧರ್ | 05.07.2000 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 521

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

## HOME AND TRANSPORT SECRETARIAT

**Sub :** Decentralization of passport services at District level Constitution of a co-ordination committee.

**Read :**
1. Official Memorandum No. VI/551/57/2001 dated: 08.01.2002 of Government of India, Ministry of External Affairs, New Delhi.
2. Letter No. FR/SB/Pass/G-56/01 dated: 02.09.2002 of the Additional Director General of Police, State Intelligence.

**Preamble:**

An Inter-Ministrerial Committee had been established during March 2001 in the Cabinet Secretariat to comprehensively review the existing system for issue passports. The Committee submitted its report in September 2001 and its recommendation have been accepted in principal by the Ministry of External Affairs. As per recommendation of the Committee, the Government of India, Ministry of External Affairs, New Delhi issued instructions to the State Government to constitute a co-ordination committee for each passport office comprising, inter-alia, State Home Secretary as Chairman, State D.G.P. or his representative, Labour Commissioner, Tourism Commissioner/Secretary, Administrative Reforms of the concerned State, one representative of the recognized travel Agents in the area, one representative of a National Level Consumer Organization active in that area and a representative of a reputed Local N.G.O and the Regional Passport Officer as the member convener. A report with suggestion of Additional Director General of Police, State Intelligence was received vide his letter dated: 02.09.2002 read at (2) above. According to the instruction of Government of India, Ministry of External Affairs and with its approval the following orders are issued.

**Government Order No. HTD 75 PMS 2001, Bangalore dated: 23rd April 2004**

The State Government hereby constitute the Co-ordination Committee with the following members.

1) Additional Chief Secretary and Principal Secretary Home and Transport Department, Vidhana Soudha, Bangalore. - Chairman
2) The Secretary to Government, Department of Personal and Administrative Reforms Vidhana Soudha, Bangalore. - Member
3) Director General and Inspector General of Police, Karnataka State or his representative - Member
4) The Commissioner of Labour, Karnataka Bhavan, Near Bangalore Dairy Circle, ITI Compound, Bannerghatta Road, Bangalore-29. - Member
5) The Commissioner, Tourism Department Khanija Bhavan, Race Course Road, Bangalore - Member

**Non-Official Member**

6) Mr. T. Vijaya President, Target Tours and Travels, S-6, Richmond Plaza, Richmond Plaza, Richmond Circle, Bangalore-560025. - Member
7) Dr. Suresh Balakrishnan Executive Director, Public Affairs Centre, 578, III Cross, 16th B. Main IIIrd Block, Koramangala, Bangalore-560034. - Member

8) Mr. Somashekar, Managing Trustee, Grahaka Shakthi, 57, 18th Cross, 4th Main, Flat No. 46, Chitrakuta Apartments, Malleswaram, Bangalore-560055. - Member

9) Regional Passport Officer, Government of India, Ministry of External Affairs, Passport Office, 1A Brunton Road, Bangalore-560025. - Member Convener

The basic functions of this Committee should be to resolve problems with State agencies and also look into public grievances and complaints.

The Co-ordination Committee will meet once in every quarter to deal with various maters related to the issue of passports in the State.

By Order and in the Name of the Governor of Karnataka,

**A. S. KANTHARAJU**

PR-536

Under Secretary to Government,

Home and Transport Department, (Passport and Foreigners).

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ವಿಷಯ :** ಶ್ರೀ ಎಂ. ಗುರುರಾಜ, ಉಪಕಾರ್ಯದರ್ಶಿ (ಪ್ರಭಾರ), ಕರ್ನಾಟಕ ವಿಧಾನಸಭೆ ಸಚಿವಾಲಯ ಇವರನ್ನು ದುರ್ನಡತೆ, ಅಶಿಸ್ತು, ಅವಿಧೇಯತೆ ಮತ್ತು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ನಡವಳಿಕೆಗಳ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ಬಾಕಿ ಇಟ್ಟು ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಡುವುದು.

**ಓದಲಾಗಿದೆ :**

1. ಕಡತ ಸಂಖ್ಯೆ ಕವಿಸಸ: ಆಡಳಿತ:100 ಇತರೆ:2004.
2. ಕಡತ ಸಂಖ್ಯೆ: ಕವಿಸಸ:ಕ:01:ಇತರೆ:03.
3. ಕಡತ ಸಂಖ್ಯೆ: ವಿಸ:ಆಸ:ಮನವ:222:2002 (ಒಟ್ಟು 12 ಕಡತಗಳು)
4. ಕಡತ ಸಂಖ್ಯೆ: ಕವಿಸಸ: ಕ:01: ಇತರೆ:03.
5. ಪೋಲಿಸ್ ಮಹಾನಿರ್ದೇಶಕರ 31.10.2003 ರ ಪತ್ರ.
6. ಕಡತ ಸಂಖ್ಯೆ: ADM-1/354/WP/90 (ಅಡಕಗಳೊಂದಿಗೆ)
7. ವಿಧಾನಸಭೆಯ ಕಾರ್ಯದರ್ಶಿಯವರು ತಾ: 9.3.2004 ರಂದು ಸನ್ಮಾನ್ಯ ಸಭಾಧ್ಯಕ್ಷರಿಗೆ ಸಲ್ಲಿಸಿರುವ ನಿವೇದನಾ ಪತ್ರ.

**ಪ್ರಸ್ತಾವನೆ:**

1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 27ರ ಪ್ರಕಾರ ಯಾವುದೇ ಒಬ್ಬ ಸರ್ಕಾರಿ ನೌಕರ ತನ್ನ ವೈಯಕ್ತಿಕ ಮನವಿಗಳನ್ನು ಸರ್ಕಾರಕ್ಕೆ ಸಮುಚಿತ ಮಾರ್ಗ [through proper channel] ಸಲ್ಲಿಸಬೇಕಾಗುತ್ತದೆಂಬ ನಿಯಮವಿದ್ದಾಗ್ಯೂ ಸಹ ಉಲ್ಲೇಖಿತ 1ರಲ್ಲಿ ಶ್ರೀ ಎಂ. ಗುರುರಾಜ ಉಪ ಕಾರ್ಯದರ್ಶಿ (ಪ್ರಭಾರ) ಇವರು ದಿನಾಂಕ: 4.3.2004 ಮತ್ತು 6.3.2004 ರಂದು ಟಿಪ್ಪಣಿಗಳನ್ನು ಹಾಗೂ ದಿನಾಂಕ: 9.3.2004 ರಂದು ಪತ್ರವನ್ನು ನೇರವಾಗಿ ಸನ್ಮಾನ್ಯ ಸಭಾಧ್ಯಕ್ಷರಿಗೆ ಸಲ್ಲಿಸಿರುತ್ತಾರೆ. ಇದರಿಂದಾಗಿ, ಶ್ರೀ ಎಂ. ಗುರುರಾಜ, ಉಪ ಕಾರ್ಯದರ್ಶಿ (ಪ್ರ) ಇವರು ನೇರವಾಗಿ ಸನ್ಮಾನ್ಯ ಸಭಾಧ್ಯಕ್ಷರಿಗೆ ಟಿಪ್ಪಣಿಗಳನ್ನು/ ಪತ್ರಗಳನ್ನು ಸಲ್ಲಿಸುವ ಮೂಲಕ ಮೇಲಧಿಕಾರಿಗಳಿಗೆ ಅವಿಧೇಯತೆಯನ್ನು ತೋರಿರುವರು ಹಾಗೂ ನಡತೆ ನಿಯಮಾವಳಿಗಳನ್ನು ಉಲ್ಲಂಘಿಸಿರುವರು.

ಸದರಿ ಅಧಿಕಾರಿಯು ತಮ್ಮ ಬಳಿ ಕರ್ತವ್ಯ ನಿರ್ವಹಿಸಲು ನಿಯೋಜಿಸಿದ್ದ ಸಿಬ್ಬಂದಿಯನ್ನು ಕರ್ತವ್ಯಕ್ಕೆ ವರದಿ ಮಾಡಿಸಿ ಕೊಂಡಿರುವುದಿಲ್ಲ ಹಾಗೂ ಹಿಂದೆ ಇದ್ದ ಸಿಬ್ಬಂದಿಯನ್ನು ಈ ಸಚಿವಾಲಯದ ಆದೇಶದಂತೆ ಸಕಾಲದಲ್ಲಿ ಬಿಡುಗಡೆಗೊಳಿಸಿರುವುದಿಲ್ಲ ಇದು ಸಚಿವಾಲಯದ ಆದೇಶಗಳನ್ನು ಅಗೌರವಿಸಿದಂತಾಗುವುದು ಮತ್ತು ನಡತೆ ನಿಯಮಾವಳಿಗಳ ಉಲ್ಲಂಘನೆಯಾಗುವುದು.

ದಿನಾಂಕ: 9.3.2004 ರಂದು, ಸಭಾಧ್ಯಕ್ಷರಿಗೆ ಸದರಿ ಅಧಿಕಾರಿ ನೇರವಾಗಿ ಪತ್ರವೊಂದನ್ನು ಸಲ್ಲಿಸಿ ಸಚಿವಾಲಯದ ಸಹೋದ್ಯೋಗಿಗಳ ಮತ್ತು ಸಚಿವಾಲಯದ ಕಾರ್ಯದರ್ಶಿಯವರ ಮೇಲೆ ಹಲವಾರು ಗುರುತರ ಆರೋಪಗಳನ್ನು ಮಾಡಿದ್ದು ಆ ಸಂಬಂಧ ಸ್ಪಷ್ಟೀಕರಣ ಕೇಳಿದಾಗ ಅದಕ್ಕೆ ಯಾವುದೇ ಸಮಂಜಸವಾದ ಸ್ಪಷ್ಟೀಕರಣವನ್ನೂ ನೀಡಲು ವಿಫಲರಾಗಿರುತ್ತಾರೆ. ಇದು ಸಚಿವಾಲಯದ ಉನ್ನತ ಅಧಿಕಾರಿಗಳ ಹಾಗೂ ಸಹೋದ್ಯೋಗಿಗಳ ವಿರುದ್ಧ ಸುಳ್ಳು ಆರೋಪಗಳನ್ನು ಮಾಡಿದಂತಾಗುವುದು. ಇದು ನಡತೆ ನಿಯಮಾವಳಿಗಳ ಉಲ್ಲಂಘನೆಯಾಗುವುದು.

ಉಲ್ಲೇಖ 2 ರಲ್ಲಿ 2003-04ರ ಆರ್ಥಿಕ ಸಾಲಿನಲ್ಲಿ ರಚನೆಯಾಗಿದ್ದಂತಹ ಕರ್ನಾಟಕ ವಿಧಾನಮಂಡಲದ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಕಲ್ಯಾಣ ಸಮಿತಿಗೆ ರಾಜ್ಯದ ಕೆಎಎಸ್ ಅಧಿಕಾರಿಯಾದ ಶ್ರೀ ಬಾಬಣ್ಣ ಎಂಬುವರು ಮತ್ತೊಬ್ಬ ಕೆಎಎಸ್ ಅಧಿಕಾರಿಯಾದ ಶ್ರೀ ವಿ. ಶಂಕರ್ ಎಂಬುವರ ವಿರುದ್ಧ ಜಾತಿ ಪ್ರಮಾಣ ಪತ್ರದ ಬಗ್ಗೆ ತನಿಖೆ ನಡೆಸಬೇಕೆಂದು ಕೋರಿ ಮನವಿ ಸಲ್ಲಿಸಿದ್ದು, ಆ ಸಂಬಂಧದಲ್ಲಿ ಸಭಾಧ್ಯಕ್ಷರು ನೀಡಿದ್ದ ಆದೇಶವನ್ನು ಸಮಿತಿಯ ಗಮನಕ್ಕೆ ತರುವಲ್ಲಿ ಹಾಗೂ ಸಮಿತಿಗೆ ಮನವರಿಕೆ ಮಾಡಿಕೊಡುವುದರಲ್ಲಿ ಸದರಿ ಅಧಿಕಾರಿ ವಿಫಲರಾಗಿದ್ದಾರೆ. ಇದು ಕರ್ತವ್ಯಲೋಪವಾಗುವುದು.

ಉಲ್ಲೇಖ 3 ಮತ್ತು 4 ರಲ್ಲಿ - ಸಚಿವಾಲಯದ ಅಧಿಕಾರಿಗಳು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು/ ವಿಶೇಷ ಮಂಡಲಿಯ ಸದಸ್ಯರುಗಳು ಮಾತ್ರ ತಮ್ಮ ಸೂಚನೆಗಳನ್ನು ಟಿಪ್ಪಣಿ ರೂಪದಲ್ಲಿ ಬರೆಯಲು ಅವಕಾಶ ಇದೆ. ಇದು ಸಚಿವಾಲಯದ ಸಂಪ್ರದಾಯ. ಆದರೆ ಸದರಿ ಅಧಿಕಾರಿಯು ಕೆಲವು ಕಡತಗಳನ್ನು ಕಾರ್ಯದರ್ಶಿಯವರ ಅನುಮೋದನೆ ಪಡೆಯದೆ ನೇರವಾಗಿ ಸಮಿತಿಗಳ ಅಧ್ಯಕ್ಷರುಗಳ ಮುಂದೆ

ಮಂಡಿಸಿ ಅವರುಗಳಿಂದ ಟಿಪ್ಪಣಿಗಳನ್ನು ಬರೆಸಿ ಸೂಚನೆಗಳನ್ನು ಪಡೆದಿರುತ್ತಾರೆ. ಇದು ಸಚಿವಾಲಯದ ಉನ್ನತ ಅಧಿಕಾರಿಗಳಿಗೆ ಮತ್ತು ಸಭಾಧ್ಯಕ್ಷರಿಗೆ ತೋರಿದ ಅಗೌರವ, ಅವಿಧೇಯತೆ ಹಾಗೂ ಅಸಂಪ್ರದಾಯ ಹಾಗೂ ನಿಯಮಗಳ ಉಲ್ಲಂಘನೆಯಾಗುವುದು.

ಉಲ್ಲೇಖಿತ 5 ರಲ್ಲಿ ಇಲಾಖಾ ಮುಖ್ಯಸ್ಥರ ಗಮನಕ್ಕೆ ತರದೇ ವಿಧಾನಸಭೆ ಕಾರ್ಯದರ್ಶಿಯವರು, ಕೊಲೆ ಬೆದರಿಕೆ ಹಾಕಿದ್ದಾರೆ. ಹಾಗೂ ತಮ್ಮ ಕಾರನ್ನು ಜಖಂಗೊಳಿಸಿದ್ದಾರೆ ಇವರ ವಿರುದ್ಧ ಕಾನೂನು ರೀತ್ಯಾ ಕ್ರಮ ತೆಗೆದುಕೊಳ್ಳಿ, ತಮಗೆ ಜೀವ ರಕ್ಷಣೆ ಒದಗಿಸಿ ಎಂದು ಶ್ರೀ ಎಂ. ಗುರುರಾಜ ಉಪಕಾರ್ಯದರ್ಶಿ (ಪ್ರಭಾರ) ಇವರು ಪೋಲಿಸ್ ಮಹಾನಿರ್ದೇಶಕರಿಗೆ ದೂರು ನೀಡಿರುತ್ತಾರೆ ಹಾಗೂ ಸಭಾಧ್ಯಕ್ಷರನ್ನು ಕೋರಿರುತ್ತಾರೆ. ಈ ಸಂಬಂಧ ಪೋಲಿಸ್ ಅಧಿಕಾರಿಗಳು ತನಿಖೆ ಕೈಗೊಂಡು ಅದರಲ್ಲಿ ಯಾವುದೇ ತಿರುಳಿಲ್ಲವೆಂದು ತೀರ್ಮಾನಕ್ಕೆ ಬಂದು ವಿಷಯವನ್ನು ಮುಕ್ತಾಯಗೊಳಿಸಿರುತ್ತಾರೆ. ಈ ಪ್ರಕರಣ ವಿಧಾನಸಭೆ ಕಾರ್ಯದರ್ಶಿಯವರ ಹೆಸರಿಗೆ ಕಳಂಕ ತರುವ ಕ್ರಮವಾಗಿದ್ದು ಮತ್ತು ಸುಳ್ಳು ಆರೋಪವಾಗಿದೆ. ಇದು ಭಾರತ ದಂಡ ಸಂಹಿತೆ ಪ್ರಕಾರ ಗಂಭೀರ ಲೋಪವಾಗುವುದು.

ಉಲ್ಲೇಖ 6ರ ರೀತ್ಯಾ ಕರ್ನಾಟಕ ವಿಧಾನಮಂಡಲದ ಶಾಸಕರ ಭವನದಲ್ಲಿ ಶ್ರೀ ಎಂ. ಗುರುರಾಜ ಅವರು ಶೀಘ್ರಲಿಪಿಗಾರರಾಗಿ 1982ರ ಫೆಬ್ರವರಿ ಮಾಹೆಯಲ್ಲಿ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಆಗ ಸ್ವಾಗತಗಾರರಾಗಿದ್ದ ಶ್ರೀ ಎಸ್. ವೈ. ಕುಳಗೇರಿ ಅವರು ಬೆರಳಚ್ಚು ಮಾಡುವಂತೆ ತಿಳಿಸಿ ನೀಡಿದ್ದ ಕಡತವೊಂದನ್ನು ತಾವು ಬೆರಳಚ್ಚು ಕೆಲಸ ನಿರ್ವಹಿಸಲು ಸಾಧ್ಯವಿಲ್ಲವೆಂದು ನಿರಾಕರಿಸಿ ಆ ಕಡತವನ್ನು ಎಸ್.ವೈ.ಕುಳಗೇರಿಯವರ ಮುಖದ ಮೇಲೆ ಎಸೆದು ಅವಾಚ್ಯ ಶಬ್ದಗಳಲ್ಲಿ ನಿಂದಿಸಿದ್ದು ಈ ನಿಂದನೆ ಬಗ್ಗೆ ಅಧಿಕಾರಿಗಳು ದಾಖಲಿಸಿದ ಕಡತದ ಟಿಪ್ಪಣಿಯನ್ನು, ಕಚೇರಿಯ ಕಾರಣ ಕೇಳುವ ಸೂಚನೆ ಮತ್ತು ಕುಳಗೇರಿಯವರು ನೀಡಿದ್ದ ದೂರಿನ ಹಾಳೆಗಳನ್ನು ಹರಿದು ಹಾಕಿ ಸರ್ಕಾರಿ ಕೆಲಸದಲ್ಲಿ ಅಪ್ರಾಮಾಣಿಕತೆ ಅಶಿಸ್ತು ಉದ್ಧಟತನ ಮುಂತಾದ ಗಂಭೀರ ಲೋಪಗಳನ್ನೆಸಗಿದ್ದರು. ಈ ಬಗ್ಗೆ ಮರು ಇಲಾಖಾ ತನಿಖೆ ಇನ್ನೂ ಇತ್ಯರ್ಥವಾಗದೆ ಬಾಕಿ ಇರುವಾಗಲೇ ಅಂತಹುದೇ ಅಶಿಸ್ತು ದುರ್ನಡತೆ ಅವಿಧೇಯತೆ ಮುಂತಾದ ಲೋಪಗಳನ್ನು ಪ್ರಸ್ತುತದಲ್ಲಿ ಎಸಗಿರುವುದು ಹೆಚ್ಚುವರಿ ಅಪರಾಧವಾದಂತಾಗುವುದು.

ಉಲ್ಲೇಖ 7ರಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಹಲವಾರು ದೂರುಗಳನ್ನು ಪಡೆಯಲಾಗಿದ್ದು, ಅವುಗಳಲ್ಲಿ: ಚೀಟಿ ವ್ಯವಹಾರ, ಪ್ರಥಮ ಪತ್ನಿ ಜೀವಂತ ಇರುವಾಗಲೇ ಎರಡನೇ ವಿವಾಹ ಮಾಡಿಕೊಂಡಿರುವುದು, ಕಚೇರಿಯ ವೇಳೆಯನ್ನು ದುರುಪಯೋಗಪಡಿಸಿ ಕೊಂಡಿರುವುದು, ಸಿಬ್ಬಂದಿ ವರ್ಗದವರ ಆಂತರಿಕ ನಿಯೋಜನೆಯ ಬಗ್ಗೆ ರಾಜಕೀಯ ಒತ್ತಡ ತಂದಿರುವುದು ಹಾಗೂ ಸಿಬ್ಬಂದಿ ವರ್ಗದವರೊಂದಿಗೆ ಅನುಚಿತವಾಗಿ ವರ್ತಿಸಿರುವುದು, ಇಲಾಖಾ ಮುಖ್ಯಸ್ಥರಿಗೆ ಅನಾವಶ್ಯಕವಾಗಿ ಆಧಾರರಹಿತ ಆರೋಪಗಳು ಮಾಡುವ ಬಗ್ಗೆ ಶಾಸಕರುಗಳಿಂದ ಸಹಿ ಸಂಗ್ರಹ ನಡೆಸಿ ವಿಶೇಷ ಮಂಡಲಿಯ ಸದಸ್ಯರಿಗೆ ಸಲ್ಲಿಸಿರುವುದಕ್ಕೆ ಸಂಬಂಧಪಟ್ಟವುಗಳಾಗಿವೆ. ಈ ಕ್ರಮಗಳು ಕಾನೂನುಬಾಹಿರವಾಗುವುವು.

ಉಲ್ಲೇಖ 1 ರಿಂದ 7 ರವರೆಗೆ ಎಲ್ಲ ಅಂಶಗಳನ್ನೂ ಪರಿಗಣಿಸಿ ಶ್ರೀ ಎಂ. ಗುರುರಾಜ ಉಪಕಾರ್ಯದರ್ಶಿ (ಪ್ರಭಾರ) ಕರ್ನಾಟಕ ವಿಧಾನಸಭೆ ಸಚಿವಾಲಯ ಇವರು ಅಶಿಸ್ತು ದುರ್ನಡತೆ., ಅವಿಧೇಯತೆ ಹಾಗೂ ಸರ್ಕಾರಿ ನೌಕರನಿಗೆತಕ್ಕುದಲ್ಲದ ಕಾರ್ಯದಲ್ಲಿ ತೊಡಗಿರುವುದು ಮತ್ತು ವಿಧಾನಸಭಾ ಕಾರ್ಯದರ್ಶಿಯವರ ಸ್ಥಾನಕ್ಕೆ ಮತ್ತು ಅವರ ಹೆಸರಿಗೆ ಕಳಂಕ ತರುವ ಮತ್ತು ಸಚಿವಾಲಯದ ಘನತೆಗೆ ಚ್ಯುತಿ ತಂದಿರುವುದು ಮೇಲ್ನೋಟಕ್ಕೆ ಕಂಡುಬರುವುದು.

ಪ್ರಯುಕ್ತ ಶ್ರೀ ಎಂ. ಗುರುರಾಜ ಉಪಕಾರ್ಯದರ್ಶಿ (ಪ್ರಭಾರ), ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರನ್ನು ಈ ಸಂಬಂಧದಲ್ಲಿ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲು ಶಿಸ್ತು ಪ್ರಾಧಿಕಾರವು ಆದೇಶಿಸಿದೆ.

**ಆದೇಶ ಸಂಖ್ಯೆ: ಕವಿಸಸ: ಆ-1/61/ಇ.ವಿ/2004 ಬೆಂಗಳೂರು, ದಿನಾಂಕ: 10ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 10ನೇ ನಿಯಮದ ಮೇರೆಗೆ ಹಾಗೂ 2003ನೇ ಇಸವಿಯ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 8 ಮತ್ತು 9 ರ ಮೇರೆಗೆ ಶ್ರೀ ಎಂ. ಗುರುರಾಜ ಉಪಕಾರ್ಯದರ್ಶಿ (ಪ್ರಭಾರ), ಕರ್ನಾಟಕ ವಿಧಾನಸಭೆ ಸಚಿವಾಲಯ ಇವರನ್ನು ಈ ಸಂಬಂಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶವಾಗುವವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎಂ. ಗುರುರಾಜ ಉಪ ಕಾರ್ಯದರ್ಶಿ (ಪ್ರಭಾರ) ಇವರಿಗೆ ನಿಯಮಾವಳಿ ಪ್ರಕಾರ ಜೀವನಾಧಾರ ಭತ್ಯೆ ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎಂ. ಗುರುರಾಜ ಉಪ ಕಾರ್ಯದರ್ಶಿ (ಪ್ರಭಾರ) ಇವರಿಗೆ ನಿಯಮಾವಳಿ ಪ್ರಕಾರ ಮಂಡಲಿಯ ಲಿಖಿತ ಅನುಮತಿ ಇಲ್ಲದೆ ತಮ್ಮ ಅಧಿಕೃತ ಕೇಂದ್ರಸ್ಥಳವನ್ನು ಬಿಡತಕ್ಕದ್ದಲ್ಲ.

ಸಭಾಧ್ಯಕ್ಷರ ಆದೇಶದ ಮೇರೆಗೆ,

**ಟಿ. ರಾಜಣ್ಣ**

ಪಿ.ಆರ್. 518 ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಸಚಿವಾಲಯ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.3.2004 ರಿಂದ 31.3.2005 ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 95 ದಿನಾಂಕ: 1.1.1996.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 83 ಸಅಸೇ 96 ದಿನಾಂಕ: 3.4.1996.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 99 ದಿನಾಂಕ: 11.11.1999.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 57 ಸಸಿವಿ 99 ದಿನಾಂಕ: 27.1.2000.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2001 ದಿನಾಂಕ: 18.06.2001.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53 ಸಸಿವಿ 2003 ದಿನಾಂಕ: 16.6.2003.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 98 ದಿನಾಂಕ: 18.10.2001.
8. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 65 ಆಡಳಿತ 2004 ದಿನಾಂಕ: 2.4.2004.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯನ್ನು ಕಾನೂನು ಇಲಾಖೆಯಿಂದ ಪ್ರತ್ಯೇಕಿಸಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯೆಂಬ ಹೊಸ ಇಲಾಖೆಯನ್ನು ಕೆಳಕಂಡ ಹುದ್ದೆಗಳೊಡನೆ ಸೃಜಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ. | 1 ಹುದ್ದೆ |
| 2. | ಆಪ್ತ ಕಾರ್ಯದರ್ಶಿ (ಶಾಖಾಧಿಕಾರಿ ಹುದ್ದೆ) | 1 ಹುದ್ದೆ |
| 3. | ಭಾಷಾಂತರಕಾರರು (ಶಾಖಾಧಿಕಾರಿ: ಹಿರಿಯ ಸಹಾಯಕ ಹುದ್ದೆ) | 1 ಹುದ್ದೆ |
| 4. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 5. | ಕಿರಿಯ ಸಹಾಯಕರು | 1 ಹುದ್ದೆ |
| 6. | ವಾಹನ ಚಾಲಕರು | 1 ಹುದ್ದೆ |
| 7. | ದಲಾಯತ್ | 2 ಹುದ್ದೆಗಳು |

ಸದರಿ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 16.6.2003ರ ಅನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2004ಕ್ಕೆ ಮುಕ್ತಾಯಗೊಂಡಿರುತ್ತದೆ. ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ: 18.10.2001ರ ಸರ್ಕಾರದ ಆದೇಶದಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಯವರ ಆಪ್ತ ಶಾಖೆಯ ಒಂದು ಭಾಷಾಂತರಕಾರರ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ.

ಸಹಾಯಕ ಪ್ರಾರೂಪಕಾರರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರು ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 2.4.2004ರ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ಖಾಯಂ ಆಗಿ ಮುಂದುವರೆಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 2004, ಬೆಂಗಳೂರು, ದಿನಾಂಕ: 4ನೇ ಮೇ 2004**

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.3.2004 ರಿಂದ ದಿನಾಂಕ: 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ. | 1 ಹುದ್ದೆ |
| 2. | ಆಪ್ತ ಕಾರ್ಯದರ್ಶಿ (ಶಾಖಾಧಿಕಾರಿ ಹುದ್ದೆ) | 1 ಹುದ್ದೆ |
| 3. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 4. | ಕಿರಿಯ ಸಹಾಯಕರು | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |

ಸದರಿ ಸರ್ಕಾರದ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 534 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2002 ದಿನಾಂಕ: 11.3.2002
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2003 ದಿನಾಂಕ: 21.6.2003.
3. ಪ್ರಧಾನ ಕಾರ್ಯದರ್ಶಿ (ಪ್ರ) ವಸತಿ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ವಇ 1114 ಪ್ರಕಾ 2004, ದಿನಾಂಕ: 6.4.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 11.3.2002ರ ಸರ್ಕಾರದ ಆದೇಶದಲ್ಲಿ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 10.1.2002 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ನಂತರ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 21.6.2003ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಯನ್ನು ದಿನಾಂಕ: 31.3.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪ್ರ) ವಸತಿ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 6.4.2004ರ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ-ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2004, ಬೆಂಗಳೂರು, ದಿನಾಂಕ: 4ನೇ ಮೇ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಸತಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 535

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ENERGY SECRETARIAT

**Subject :** According "in principle clearance" for setting up 6 M.W. capacity Biomass based Power plant by M/s. Bhoruka Power Corporation Limited at Chikkanayakanahalli, Tumkur District-orders relating to.

**Read :**
1. Letter No. KRED/03/BPCL/2000/1724, dated: 4.11.2003, received from the Managing Director, Karnataka Renewable Energy Development Limited, Bangalore.
2. Proceedings of the allotment committee meeting held on 6.3.2004.

**Preamble:**

In the letter read at (1) above, the Managing Director, Karnataka Renewable Energy Development Limited, Bangalore has recommanded for setting up of 6 M.W. Bio-mass Power Plant at Chikkanayakanahalli, Tumkur District by M/s Bhoruka Power Corporation Limited.

2. The allotment committee has approved this proposal in the meeting held on 6.3.2004 vide proceedings read at (2) above, Hence, the following Order,

**Government Order No. DE 263 NCE 2003, Bangalore, dated: 17th May 2004**

3. After examining the proposal, Government are pleased to convey "No objection" for setting up 6 M.W. capacity Biomass based Power plant by M/s Bhoruka Power Corporation Limited at Chikkanayakanahalli, Tumkur District, subject to the following conditions.

1. The company shall obtain separate clearance from Karnataka Power Transmission Corporation Limited in respect of evacuation of Power.
2. The company shall enter into wheeling and Banking agreement with Karnataka Power Transmission Corporation Limited in case of selling power to third party and power purchase agreement in case of selling Power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/ Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the Power plant.

By Order and in the Name of the Governor of Karnataka,

PR-537

**K. L. JAYARAM**

Under Secretary to Government,

Energy Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಆಕುಕ 247 ಪಿಐಎಂ 2004, ಬೆಂಗಳೂರು, ದಿನಾಂಕ: 18ನೇ ಮೇ 2004**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ವೈದ್ಯರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 85 ಪಿಐಎಂ 99, ದಿನಾಂಕ: 29.1.2004ರ ಕ್ರಮ ಸಂಖ್ಯೆ: 88 ರಲ್ಲಿನ ಡಾ: ಎಂ. ಎನ್. ಅಸ್ಲಾಂ ಎಂಬ ಹೆಸರಿನ ಬದಲಾಗಿ ಡಾ: ಮಹಮ್ಮದ್ ಅಮೀನುದ್ದೀನ್ ಅಸ್ಲಾಂ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 538 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಶಿರಾ ತಾಲ್ಲೂಕಿನಲ್ಲಿ ನಡೆದಿರುವ ಅವ್ಯವಹಾರದ ವಿರುದ್ಧದ ಶಿಸ್ತುಕ್ರಮಗಳ ಬಗ್ಗೆ ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳ ನೇಮಕಾತಿಯ ಬಗ್ಗೆ.

**ಓದಲಾಗಿದೆ :** 1. ಸಂಖ್ಯೆ: ಕೃತೋಇ 235 ತೋಸೇಪ 97 ದಿನಾಂಕ: 3.2.2004.

2. ಶ್ರೀ ಕೆ. ಎಸ್. ಅಜ್ಜೇಗೌಡ, ಸ.ತೋ.ನಿ.ರವರ ಹೇಳಿಕೆ ದಿನಾಂಕ: 6.3.2004.

**ಪ್ರಸ್ತಾವನೆ:**

ಶ್ರೀ ಕೆ. ಎಸ್. ಅಜ್ಜೇಗೌಡ, ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪ) ನೆಲಮಂಗಲ ಇವರು ಈ ಹಿಂದೆ ಶಿರಾ ತಾಲ್ಲೂಕಿನಲ್ಲಿ ತೆಂಗು ಅಭಿವೃದ್ಧಿ ಯೋಜನೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತೆಂಗು ಅಭಿವೃದ್ಧಿ ಮಂಡಳಿಯ ನೆರವಿನಡಿ ನೀಡಲಾದ ಸಹಾಯಧನವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ ಎಂಬ ಆಪಾದನೆಗೆ ಸಂಬಂಧಿಸಿದಂತೆ ಅವರಿಗೆ ಮೇಲೆ ಕ್ರಮಾಂಕ 1 ರಲ್ಲಿ ಓದಲಾಗಿರುವ ದಿನಾಂಕ: 3.2.2004 ರ ಸರ್ಕಾರಿ ಕಾರಣ ಕೇಳುವ ಪತ್ರದಲ್ಲಿ ಆರೋಪ ಪಟ್ಟಿಯನ್ನು ಜಾರಿಮಾಡಲಾಗಿತ್ತು.

ಕ್ರಮಾಂಕ 2 ರಲ್ಲಿ ಓದಲಾಗಿರುವ ದಿನಾಂಕ: 6.3.2004 ರ ಪತ್ರದಲ್ಲಿ ಶ್ರೀ ಕೆ. ಎಸ್. ಅಜ್ಜೇಗೌಡ, ಸಹಾಯಕ ತೋಟಗಾರಿಕೆ ನಿರ್ದೇಶಕರವರು ತಮಗೆ ಜಾರಿ ಮಾಡಲಾದ ಕಾರಣ ಕೇಳುವ ಪತ್ರಕ್ಕೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ತಳ್ಳಿಹಾಕಿರುತ್ತಾರೆ ಮತ್ತು ತಮ್ಮ ಹೇಳಿಕೆಯಲ್ಲಿ ತಾವು ಮೇಲಧಿಕಾರಿಗಳು ಸೂಚಿಸಿದ ಕೆಲಸಗಳನ್ನು ನಿರ್ವಹಿಸಿರುವುದಾಗಿ ಹೇಳಿರುತ್ತಾರೆ. ಅಲ್ಲದೆ ಆಪಾದನೆಯಲ್ಲಿ ನಮೂದಿಸಿರುವ ಯಾವುದೇ ಫಲಾನುಭವಿಗಳನ್ನು ತಾವು ಗುರುತಿಸಿರುವುದಿಲ್ಲ ಮತ್ತು ಆಯ್ಕೆ ಮಾಡಿರುವುದಿಲ್ಲ. ಅರ್ಜಿಗಳನ್ನು ಪಡೆಯುವ ಮತ್ತು ಫಲಾನುಭವಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆಗಳಲ್ಲಿ ತಾವು ಭಾಗಿಯಾಗಿರುವುದಿಲ್ಲ. ಮಂಡಳಿಯಿಂದ ಮಂಜೂರಾದ ಸಹಾಯಧನ ನೇರವಾಗಿ ಫಲಾನುಭವಿಗಳ ಖಾತೆಗಳಿಗೆ ಅಕೌಂಟ್ ಪೇಯಿ ಹುಂಡಿಗಳ ಮೂಲಕ ವಿತರಣೆಯಾಗಿರುವುದಾಗಿ ಹೇಳಿ ತಮ್ಮ ಮೇಲಿನ ಆರೋಪಗಳನ್ನು ತಳ್ಳಿಹಾಕಿರುತ್ತಾರೆ. ಸದರಿ ಅಧಿಕಾರಿಯವರು ಹೇಳಿರುವ ಮೇಲ್ಕಂಡ ಹೇಳಿಕೆಗಳನ್ನು ಅವರ ಮೇಲಿನ ಆರೋಪಗಳೊಂದಿಗೆ ಹೋಲಿಸಿದಾಗ ತೃಪ್ತಿಕರವಾಗಿ ಕಂಡುಬರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ತೀರ್ಮಾನಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 235 ತೋಸೇಪ 97 ಬೆಂಗಳೂರು ದಿನಾಂಕ: 14ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಅಜ್ಜೇಗೌಡ, ಸಹಾಯಕ ತೋಟಗಾರಿಕೆ ನಿರ್ದೇಶಕರು, ನೆಲಮಂಗಲ ಇವರು ಶಿರಾ ತಾಲ್ಲೂಕಿನ ತೆಂಗು ಅಭಿವೃದ್ಧಿ ಯೋಜನೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11 ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ರಾಜೀವ್ ಹೆಗ್ಡೆ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ತೋಟಗಾರಿಕೆ ಉಪ ನಿರ್ದೇಶಕರು, (ಜಿಪ) ತುಮಕೂರು ಕಚೇರಿಯ ಅಧೀಕ್ಷಕರವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಚೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೇಯೇ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ರೂ. 5,000/- (ರೂ. ಐದು ಸಾವಿರ ಮಾತ್ರ) ಗಳ ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 540 ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬಾಲ್ಕಿ ಇವರು ಎಸಗಿರುವ ಅಕ್ರಮ/ ಕರ್ತವ್ಯಲೋಪಗಳಿಗೆ ಸಂಬಂಧಿಸಿದಂತೆ ಅವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ-ಆದೇಶ.

**ಓದಲಾಗಿದೆ :** ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್ ಇವರ ಪತ್ರ ಸಂ: ಜಡ್‌ಪಿಬಿ/ಪಿಎಸ್/ ಸಿಇಓ/ 04-05 ದಿನಾಂಕ: 18.5.04.

**ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ, 04, ಬೆಂಗಳೂರು, ದಿನಾಂಕ: 20ನೇ ಮೇ 2004**

ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬಾಲ್ಕಿ ಇವರು ನಿರೀಕ್ಷಿತ ಮಟ್ಟದಲ್ಲಿ ಕೆಲಸ ನಿರ್ವಹಿಸುತ್ತಿಲ್ಲವೆಂದು ಅವರ ಕರ್ತವ್ಯನಿಷ್ಠೆ ಸಂಶಯಾಸ್ಪದವಾಗಿಯೆಂದು ಅಲ್ಲದೆ ಇವರು ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ವಿಳಂಬ ಮಾಡುತ್ತಿದ್ದು, ಸಕಾಲದಲ್ಲಿ ಕೆಲಸಗಳನ್ನು ಮುಗಿಸಿರುವುದಿಲ್ಲವೆಂದು, ಇದಲ್ಲದೆ ತಾಲ್ಲೂಕಿನಲ್ಲಿ 74.00 ಲಕ್ಷ ರೂ.ಗಳ ಮೊತ್ತದ 3 ಪಿ.ಎಂ.ಜಿ.ಎಸ್.ವೈ. ಕಾಮಗಾರಿಗಳನ್ನು, ಕೈಗೊಳ್ಳಲಾಗಿದ್ದು, ಇವುಗಳನ್ನು ತೀರಾ ಕಳಪೆ ಮಟ್ಟದಲ್ಲಿ ನಿರ್ವಹಿಸಲಾಗಿರುವುದು, ತಾವು ಖುದ್ದಾಗಿ ಈ ಕಾಮಗಾರಿಗಳನ್ನು ನೋಡಿದಾಗ ತಿಳಿದುಬಂದಿರುವುದಾಗಿಯು ಎಸ್.ಕ್ಯೂ.ಎಂ. ಮತ್ತು ಎನ್.ಕ್ಯೂ.ಎಂ. ನವರು ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು, ರಸ್ತೆ ನಿರ್ಮಾಣಕ್ಕೆ ಕಪ್ಪು ಮಣ್ಣನ್ನು ಉಪಯೋಗಿಸಿದ್ದು, ಕಳಪೆ ಮಟ್ಟದ ಮೆಟಲಿಂಗ್ ಉಪಯೋಗಿಸಲಾಗಿದೆಯೆಂದೂ, ನಿಗದಿಪಡಿಸಿದ ಗಾತ್ರಕ್ಕಿಂತ ಕಡಿಮೆ ಪ್ರಮಾಣದ ಡಾಂಬರ್ ಹಾಕಲಾಗಿದೆಯೆಂದು ಹಾಗೂ ಸದರಿಯವರು ನಿರ್ವಹಿಸಿರುವ ಕಾಮಗಾರಿಗಳನ್ನು ಪರಿವೀಕ್ಷಿಸಿದಾಗ ಈ ಕೆಳಕಂಡ ನ್ಯೂನತೆಗಳು ಕಂಡುಬಂದಿರುವುದಾಗಿ ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್ ಇವರು ವರದಿ ಮಾಡಿದ್ದಾರೆ.

- ಪೂರ್ಣಗೊಂಡ ರಸ್ತೆ ಕಾಮಗಾರಿಗಳ ಮೇಲ್ಮೈ ಕುಸಿದಿರುವುದು ಅಥವಾ ಡಾಂಬರ್ ಕಿತ್ತು ಹೋಗಿರುವುದು ಅಥವಾ ರಸ್ತೆಗಳ ಇಕ್ಕೆಲೆಗಳನ್ನು ಸರಿಪಡಿಸದೆ ಇರುವುದು.
- ಜಲ್ಲಿಯ ದಪ್ಪ 40 ಎಂಎಂನಿಂದ 60 ಎಂಎಂ ಇರಬೇಕಾಗಿದ್ದು, ಅದರಲ್ಲಿ ಬಹುತೇಕ ಧೂಳಿರುತ್ತದೆ. ಗುತ್ತಿಗೆದಾರರು ಕಳಪೆ ಸಾಮಗ್ರಿಗಳನ್ನು ತೆಗೆದು ಒಳ್ಳೆಯ ಗುಣಮಟ್ಟದ ಸಾಮಗ್ರಿಗಳನ್ನು ಉಪಯೋಗಿಸಲು ತಿಳಿಸುವಂತೆ ಹೇಳಿದ್ದರೂ ಸಹ ಹಾಗೇ ಮಾಡದೆ ಅದೇ ಕಳಪೆ ಸಾಮಗ್ರಿಗಳನ್ನು ಉಪಯೋಗಿಸಲು ಬಿಟ್ಟಿದ್ದಾರೆ.
- ಗುತ್ತಿಗೆದಾರರಿಗೆ ನೋಟಿಸ್ ನೀಡಿ ಕಾಮಗಾರಿಗಳನ್ನು ಸರಿಪಡಿಸುವಂತೆ ತಪಾಸಣೆ ಸಮಯದಲ್ಲಿ ತಿಳಿಸಿದ್ದರೂ ಸಹ ಇವರು ಅಂತೆಯೇ ಕ್ರಮ ಕೈಗೊಳ್ಳದಿರುವುದು ಅವರ ದುರುದ್ದೇಶವಾಗಿದೆ ಮತ್ತು ಅವರ ಕರ್ತವ್ಯ ನಿಷ್ಠೆ ಸಂಶಯಾಸ್ಪದವಾಗಿದೆ.
- ಇದೇ ರೀತಿ ನಬಾರ್ಡ್‌ನಡಿ ಸಹ ಕಳಪೆ ಮಟ್ಟದ ಕಾಮಗಾರಿ ಮಾಡಿ 18.00 ಲಕ್ಷರೂ. ಸಾರ್ವಜನಿಕ ಹಣವನ್ನು ಮುಗಿಸಿದ್ದಾರೆ.
- ಪಿಎಂಜಿಎಸ್‌ವೈ ಮತ್ತು ನಬಾರ್ಡ್ ಕಾಮಗಾರಿಗಳನ್ನು ಅಂದಾಜುಗಳಂತೆ ನಿರ್ವಹಿಸಲು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ನೇರವಾಗಿ ಜವಾಬ್ದಾರರಾಗಿದ್ದು, ಇವರು ತಮ್ಮ ಕರ್ತವ್ಯದಲ್ಲಿ ವಿಫಲರಾಗಿದ್ದಾರೆ.
- ಆಳವಾಯಿ ಗ್ರಾಮದಲ್ಲಿ ಬರಪರಿಹಾರ ನಿಧಿಯಡಿ ಕೈಗೊಂಡ 8.00 ಲಕ್ಷರೂ.ಗಳ ಕಾಮಗಾರಿಯನ್ನು ಕಳಪೆ ಮಟ್ಟದಲ್ಲಿ ನಿರ್ವಹಿಸಿ, ಹಣ ದುರುಪಯೋಗಕ್ಕೆ ಕಾರಣರಾಗಿದ್ದಾರೆ.

ಸದರಿಯವರು ಮೇಲ್ಕಂಡಂತೆ ಎಸಗಿರುವ ಅಕ್ರಮ ಹಾಗೂ ಕರ್ತವ್ಯಲೋಪಗಳಿಗೆ ಸಂಬಂಧಿಸಿದಂತೆ ಅವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್ ಇವರು ಮೇಲೆ ಓದಲಾದ ದಿನಾಂಕ: 18.5.04 ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದಾರೆ.

ಸದರಿ ಆಪಾದನೆಗಳು ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬಾಲ್ಕಿ ಇವರು ನಿರ್ವಹಿಸುತ್ತಿರುವ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂತಹವುಗಳಾಗಿರುವುದರಿಂದಲೂ;

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿ ಬಂದ ದಾಖಲೆ/ದಸ್ತಾವೇಜುಗಳನ್ನು ಪರಿಶೀಲಿಸಲಾಗಿ ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬಾಲ್ಕಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ಅಪೇಕ್ಷಣೀಯವೆಂದು ಕಂಡು ಬಂದಿರುವುದರಿಂದಲೂ;

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10ರ ನಿಯಮ 1(ಡಿ) ಪ್ರಕಾರ ಸರ್ಕಾರವು ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ ಬಾಲ್ಕಿ ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಮೂಲಕ ಅಮಾನತ್ತಿನಲ್ಲಿಡಲು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬಾಲ್ಕಿ ಇವರಿಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಶಿವಕುಮಾರ್ ಗಾಯತೊಂಡೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿ ಇಲ್ಲದೆ ಅವರ ಕಚೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್. 545